–ಡಾ|| ಪ್ರತಿಭಾ ಚಿಣ್ಣಪ್ಪ*

# ವೀಳ್ಯದ ಪ್ರಾಧಾನ್ಯತೆ ಮತ್ತು ಬಳಕೆಯ ವೈವಿಧ್ಯ

ಬಹು ಪುರಾತನ ಕಾಲದಿಂದಲೂ ವೀಳ್ಯಕ್ಕೆ ನಮ್ಮ ಜನರಲ್ಲಿ ಪ್ರಮುಖಸ್ಥಾನವುಂಟು. ಸಾಂಘಿಕವಾಗಿ, ಸಾಂಸ್ಕೃತಿಕವಾಗಿ, ಪೂಜಾಸಾಮಗ್ರಿಯಾಗಿ ವ್ಯಾಪಾರವಸ್ತುವಾಗಿ ಹೀಗೆ ಬಗೆಬಗೆಯಾಗಿ ನಮ್ಮ ದೈನಂದಿನ ಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದುಬಂದಿರುವ ಎಳೆಯ ಚಿಗುರೆಲೆಯ ವೀಳ್ಯದ ಚರಿತ್ರೆ ಬಹು ಸ್ವಾರಸ್ಯಕರವಾದುದು.

ರಾಜಕೀಯ ದರ್ಪ ಇದಕ್ಕಿಲ್ಲ. ಸಮಾಜದಲ್ಲಾಗಲೀ, ಧರ್ಮದಲ್ಲಾಗಲೀ ವಿಪ್ಲವಗಳನ್ನೇನೂ ತಂದಿಲ್ಲ. ಚಿನ್ನಬೆಳ್ಳಿಯ ತೂಕವಾಗಲೀ, ಮುತ್ತುರತ್ನಗಳ ಹೊಳಪಾಗಲೀ ಇದಕ್ಕಿಲ್ಲ. ಆದರೂ ಜೀವನದ ಎಲ್ಲಾ ಹಂತಗಳಲ್ಲೂ ವೀಳ್ಯ ಪ್ರಮುಖವಾಗಿ ಕಾಣಿಸುತ್ತದೆ. ಅದರ ಬಳಕೆಯಲ್ಲಿ ಎರಡು ವಿಧ. ವೀಳ್ಯವನ್ನು ಭೋಜನಾನಂತರ ಚರ್ವಣವಾಗಿ ಬಳಸಲಾದರೆ, ವ್ಯವಹಾರದಲ್ಲಿ ಅರ್ಥಗರ್ಭಿತವಾದ ಸಂಕೇತವಾಗಿ ಪರಿಗಣಿಸಲಾಗಿದೆ. ಅಗ್ರತಾಂಬೂಲ ಸಲ್ಲುವುದಾದರೂ ಪಾಂಡಿತ್ಯದಲ್ಲಾಗಲೀ, ಯುದ್ಧನೈಪುಣ್ಯದಲ್ಲಾಗಲೀ, ಕಲೆಯಲ್ಲಾಗಲೀ, ರಾಜನೀತಿಯಲ್ಲಾಗಲೀ ಅಗ್ರಗಣ್ಯನಾಗಿದ್ದರೆ ಮಾತ್ರ.

ಆರಂಭ ಸೂಚಕವಾಗಿ ವೀಳ್ಯ ಯುದ್ಧಕ್ರೀಡೆಗಳಲ್ಲಿ ಎದುರಾಳಿಯನ್ನು ಸೋಲಿಸಲು ಕಣಕ್ಕಿಳಿಯುವವರಿಗೆ ವೀಳ್ಯವನ್ನು ನೀಡಲಾಗುತ್ತಿತ್ತು. ಅದನ್ನು ಸ್ವೀಕರಿಸುವುದು ಸಮ್ಮತಿ ಸೂಚಕ. ಸ್ವೀಕರಿಸಿದ ನಂತರ ಹಿಂದಿರುಗುವಂತಿಲ್ಲ, ತೊಟ್ಟ ಪಣಕ್ಕೆ ಬದ್ಧರಾಗುತ್ತಾರೆ. ಹಾಗೆಯೇ ವಿವಾಹಾದಿ ಶುಭಕಾರ್ಯಗಳಲ್ಲೂ ನಿಶ್ಚಯತಾಂಬೂಲದ ವಿನಿಮಯ ಹಿರಿಯರ ಹಾಗೂ ವಧೂ–ವರರ ಸಮ್ಮತಿಯ ಸಂಕೇತವಾಗಿ ಪರಿಣಮಿಸುತ್ತದೆ. ವಿದ್ಯಾರಂಭದಲ್ಲಿ ಗುರುವಿಗೆ ವೀಳ್ಯ ನೀಡಲಾಗುತ್ತದೆ. ಸ್ವೀಕರಿಸಿದ ಗುರು ಶಿಷ್ಯನ ವಿದ್ಯಾಭ್ಯಾಸದ ಹೊರೆಯನ್ನು ಹೊರುತ್ತಾನೆ. ದೇವರನ್ನು ಅರ್ಚಿಸುವಾಗ ಮುತ್ತೈದೆಯರಿಗೆ ವೀಳ್ಯವನ್ನು ಕೊಡುವಾಗ ವೀಳ್ಯ ಸಂಪ್ರದಾಯದ ಸಂಕೇತವಾಗಿದೆ. ಒಬ್ಬರನ್ನೊಬ್ಬರು ಬೀಳ್ಕೊಡುವುದಾದರೂ ತಾಂಬೂಲ ಗ್ರಹಣಾನಂತರವೆ.

ಹತ್ತನೆಯ ಶತಮಾನದಲ್ಲಿದ್ದ ಅರಬ್ ಬರಹಗಾರನಾದ ಅಲ್–ಮಸೂದಿ (Al-Musudi) ತಾಂಬೂಲವನ್ನು 'ತಾನ್‌ಬೂಲ್' ಎಂಬುದಾಗಿ ಕರೆದಿದ್ದಾನೆ. ಇದು ಯಮನ್‌ನಲ್ಲಿ ಬೆಳೆಯುವ ಬೈಬುಲ್ (Bibul) ಗಿಡದ ಎಲೆಯ ಗಾತ್ರ ಇರುತ್ತದೆ. ಗ್ರಾಮದ ವಿವಾದದ ಪರಿಷ್ಕರಣದ ನಂತರವೂ, ಅಣ್ಣತಮ್ಮಂದಿರ ಜಗಳ (ಆಸ್ತಿಗಾಗಿ)ಗಳನ್ನು ಪರಿಹರಿಸಿದ ಸಂಕೇತವಾಗಿಯೂ ವೀಳ್ಯವನ್ನು ಕೊಡುತ್ತಿದ್ದರು. 'ಹಿಂದ್' ದೇಶದ ದೊರೆಗಳಾದರೋ ಯುದ್ಧಕ್ಕೆ ಸೇನಾಧಿಪತಿಗಳನ್ನು ಕಳುಹಿಸುವಾಗ ಕತ್ತಿಯ ಮೇಲೆ ವೀಳ್ಯವನ್ನು ಇಟ್ಟು ಕಳುಹಿಸುತ್ತಿದ್ದರು. ಇದೇ ರಣವೀಳ್ಯ. ಈ ಎಲ್ಲ ಸಂದರ್ಭಗಳಲ್ಲೂ ವೀಳ್ಯದ ಜೊತೆಗೆ ಅಡಿಕೆಯ ಬಳಕೆಯ ಉಲ್ಲೇಖವಿರುತ್ತಿತ್ತೇ ವಿನಾ ಸುಣ್ಣದ ಉಲ್ಲೇಖ ಕಂಡುಬರುವುದಿಲ್ಲ.

---

* ಇತಿಹಾಸ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬

ತಾಂಬೂಲದ ಬಳಕೆ ವೇದಕಾಲದಿಂದಲೂ ನಮ್ಮಲ್ಲಿ ರೂಢಿಯಲ್ಲಿದೆ. ರಾಮಾಯಣದಲ್ಲಿ ನಾಗವಲ್ಲಿ, ಅಮರದಲ್ಲಿ ತಾಂಬೂಲವಲ್ಲಿಯೇ ಅಲ್ಲದೆ ಅದನ್ನು ತಾನ್‌ಬುಲ್, ತಾನ್‌ಬುರ್ ಹಾಗೂ ಫಣಿರಾಜವಲ್ಲಿ ('ಅಮುಕ್ತ ಮಾಲ್ಯದ') ಎಂಬಿತ್ಯಾದಿಯಾದ ಹೆಸರುಗಳಿಂದ ಕರೆಯಲ್ಪಡುತ್ತಿತ್ತು. ರಾಮಾಯಣದಲ್ಲಿ ಉಕ್ತವಾಗಿರುವ ನಾಗವಲ್ಲಿ ಎಂಬ ವಿವರ ಹಾಗೂ 'ಅಮರ'ದಲ್ಲಿ ಉಕ್ತವಾಗಿರುವ 'ತಂಬೂಲವಲ್ಲಿ, ತಾಂಬೂಲಿ, ನಾಗವಲ್ಲ್ಯಪಿ' ಎಂಬ ವಿವರವನ್ನು ಗಮನಿಸಿದಾಗ. ರಾಮಾಯಣದಲ್ಲಿ ಉಕ್ತವಾಗಿರುವ ನಾಗವಲ್ಲಿ ಎಂಬುದು ವೀಳ್ಯವನ್ನು ಕುರಿತ ಪ್ರಸ್ತಾಪವೇ ಆಗಿರುವುದು ಸ್ಪಷ್ಟವಾಗುತ್ತದೆ. ತಾಂಬೂಲ ಸೇವನೆ ಆರೋಗ್ಯಕರವಾದದ್ದು ಎಂಬ ಮಾತುಂಟು. ಆಯುರ್ವೇದದಲ್ಲಿ ತಾಂಬೂಲಕ್ಕೆ ಮಹತ್ವವನ್ನು ನೀಡಲಾಗಿದೆ. ಬಾಣಭಟ್ಟನು ತನ್ನ ಕಾದಂಬರಿಯಲ್ಲಿ ತಾಂಬೂಲವನ್ನು ಸೇವಿಸುವವರು, ಭೋಜನಾನಂತರ ಬಾಯಿಯನ್ನು ನೀರಿನಿಂದ ಚೆನ್ನಾಗಿ ಶುಚಿಗೊಳಿಸಿಕೊಂಡು ಆನಂತರವೇ ವೀಳ್ಯವನ್ನು ಸೇವಿಸಬೇಕೆನ್ನುತ್ತಾನೆ. ಅಂತಃಪುರದಲ್ಲಿ ರಾಣಿಯರಿಗೆ ವೀಳ್ಯವನ್ನು ಮಡಿಸಿಕೊಡುವುದಕ್ಕಾಗಿಯೇ ಪ್ರತ್ಯೇಕವಾದ ದಾಸಿಯರಿರುತ್ತಿದ್ದರು. ಅಂತೆಯೇ ಪ್ರತ್ಯೇಕವಾದ ಊಳಿಗವೇ ಇರುತ್ತಿತ್ತು. ಬೆಳಗಾಗುತ್ತಲೇ ದಾಸಿ ಮಿರುಗುತ್ತಿರುವ ನವಿರಾದ ಹಸಿರು ಎಲೆಯಲ್ಲಿ ಲವಂಗ ಕರ್ಪೂರಗಳನ್ನಿಟ್ಟು ಮಡಿಸಿ ದಂತದ ಕರಂಡಿಕೆಗಳಲ್ಲಿಡುತ್ತಿದ್ದು, ರಾಣಿಯರು ಎದ್ದಕೂಡಲೆ ಅವರಿಗೆ ಕೊಡುತ್ತಿದ್ದರು. ಹೀಗೆ ಬಾಯಿಯನ್ನು ಶುಚಿಗೊಳಿಸಿಕೊಳ್ಳದೆಯೇ ವೀಳ್ಯವನ್ನು ಸೇವಿಸುವ ಚಪಲವನ್ನು ಖಂಡಿಸುತ್ತಾ ಬದ್ದೆನನು ತನ್ನ 'ಶತಕರತ್ನ'ದಲ್ಲಿ ಹಲ್ಲುಜ್ಜದೇ ವೀಳ್ಯವನ್ನು ತಿನ್ನುವುದು ಅನಾರೋಗ್ಯಕರ, ಅದು ತಪ್ಪು ಎನ್ನುತ್ತಾನೆ. ಭೋಜನಾನಂತರ ಸೇವಿಸುತ್ತಿದ್ದ ವೀಳ್ಯ ಕ್ರಮೇಣ ಅಭ್ಯಾಸವಾಗಿ ಸದಾ ಮೆಲ್ಲುವ ಚಟವಾಯಿತು. ಕಾಮಸೂತ್ರದಲ್ಲಿನ ನಾಗರಿಕನು ಅಲಂಕೃತನಾಗಿ ಬಾಯಿ ಸಿಹಿಯಾಗಿಯೂ, ಸುಗಂಧ ಭರಿತವಾಗಿಯೂ ಇರಲು ವೀಳ್ಯವನ್ನು ಮೆಲ್ಲುತ್ತಿದ್ದನು. "ಗೃಹೀತ್ವ ಮುಖವಾಸ ತಾಂಬೂಲಃ".

ಒಂದನೆಯ ಕುಮಾರಗುಪ್ತನ ಮಂದಸೋರ್ ಶಾಸನವು ಸುಂದರಿಯೊಬ್ಬಳು ಅಲಂಕೃತಳಾಗಿ ವೀಳ್ಯವನ್ನು ಮೆಲ್ಲುತ್ತಿದ್ದಳೆನ್ನುವುದನ್ನು ಉಲ್ಲೇಖಿಸುತ್ತದೆ. ಅಲ್ ಮಸೂದಿ ಒಂದು ವಿಚಿತ್ರವಾದ ನಂಬಿಕೆಯನ್ನು ಹೇಳುತ್ತಾನೆ. ಹಿಂದ್‌ದೇಶದ ಜನರು ವೀಳ್ಯ ಮೆಲ್ಲುತ್ತಿದ್ದಾಗ ಸಾವನ್ನಪ್ಪಿದರೆ ಸ್ವರ್ಗಕ್ಕೆ ಹೋಗುತ್ತಾರೆಂಬ ನಂಬಿಕೆ ಉಂಟು. ಸತಿಯಾಗಿ ಹೋಗುವ ಸ್ತ್ರೀ ತಾಂಬೂಲವನ್ನು ಜಗಿಯುತ್ತಾ ಚಿತೆಯಲ್ಲಿ ಜಿಗಿಯುತ್ತಿದ್ದಳು. ೧೩ನೇ ಶತಮಾನದ ದಕ್ಷಿಣಭಾರತವನ್ನು ಸಂದರ್ಶಿಸಿದ ವೆನಿಸಿನ ವರ್ತಕನಾದ ಮಾರ್ಕೋಪೋಲೋ ಭಾರತೀಯರನ್ನು ವರ್ಣಿಸುತ್ತಾ ಹೀಗೆ ಹೇಳುತ್ತಾನೆ. "ಭಾರತೀಯರು ಬಾಯಲ್ಲಿ 'ತಾನ್‌ಬುರ್' ಎನ್ನುವ ಎಲೆಯನ್ನು ಸದಾ ಜಗಿಯುವ, ರಸವನ್ನು ಉಗಿಯುವ ಚಟವನ್ನು ಹೊಂದಿದ್ದರು. ರಾಜಮಹಾರಾಜರು, ಉನ್ನತವರ್ಗದವರು ವೀಳ್ಯವನ್ನು ಪಚ್ಚಕರ್ಪೂರ, ಏಲಕ್ಕಿ, ಲವಂಗ, ಜಾಕಾಯಿ, ಜಾಯಿಪತ್ರೆ ಮುಂತಾದ ಸುಗಂಧ ಪದಾರ್ಥಗಳೊಂದಿಗೆ, ಸುಣ್ಣವನ್ನು ಲೇಪಿಸಿ ಅಡಿಕೆಯೊಂದಿಗೆ ಸೇವಿಸುತ್ತಿದ್ದರು.

ವೈರಿಯನ್ನು ಕೆಣಕುವುದಕ್ಕೂ ವೀಳ್ಯ ಸಹಾಯಕ್ಕೆ ಬರುತ್ತಿತ್ತು. ಮಾರ್ಕೋಪೋಲೋ ಹೇಳಿಕೆಯಂತೆ ವೈರಿಯನ್ನು ಅವಮಾನಗೊಳಿಸಲು ಜಗಿಯುತ್ತಿದ್ದ ವೀಳ್ಯವನ್ನು ಎದುರಾಳಿಯ ಮುಖದ ಮೇಲೆ ಉಗಿದು 'ನಿನ್ನ ಯೋಗ್ಯತೆ ಇದಕ್ಕಿಂತಲೂ ಕಡಿಮೆ' ಎಂದು ಮೂದಲಿಸುತ್ತಿದ್ದನು. ಅಪಮಾನಿತನಾದ ಎದುರಾಳಿಯು ರಾಜನಲ್ಲಿ ದೂರು ಹೇಳಿಕೊಂಡು ದ್ವಂದ್ವ ಯುದ್ಧಕ್ಕೆ ಅನುಮತಿಯನ್ನು ಪಡೆಯುತ್ತಿದ್ದನು. ಹೀಗೆ ಎದುರಾಳಿಯನ್ನು ಹೀಯಾಳಿಸಿದುದೇ ಅಲ್ಲದೆ ದ್ವಂದ್ವ ಯುದ್ಧಕ್ಕೆ ಅವಕಾಶವನ್ನೂ ಗಿಟ್ಟಿಸಿಕೊಳ್ಳುತ್ತಿದ್ದನು.

ವೀಳ್ಯವು ರಾಜ್ಯಾದಾಯದ ವಸ್ತುವಾಗಿದ್ದು ಅದಕೆ ಪ್ರತ್ಯೇಕವಾದ ಸುಂಕಗಳನ್ನು ವಿಧಿಸಲಾಗಿತ್ತು. ಅವುಗಳಿಗೆ ವಿಧಿಸಲಾದ ಸುಂಕಗಳ ವಿವರಗಳನ್ನು ಶಾಸನಗಳಿಂದ ಕಂಡುಕೊಳ್ಳಬಹುದಾಗಿದೆ. ಒಂದು ಬುಟ್ಟಿ ವೀಳ್ಯಕ್ಕೆ ಒಂದು ಕವಳಿಗೆ ಸುಂಕವನ್ನು ತೆರಬೇಕಾಗುತ್ತಿತ್ತು. ರಾಷ್ಟ್ರಕೂಟರ ಕಾಲದಲ್ಲಿ ಅಡಿಕೆಗೂ ಸುಂಕವಿರುತ್ತಿತ್ತು. ಹೊಯ್ಸಳರ ಕಾಲದಲ್ಲಿ ಎಣಿಸಿದ ಪ್ರತೀ ಸಾವಿರ ಅಡಿಕೆಗಳಿಗೆ ಹತ್ತು ಅಡಿಕೆಗಳನ್ನು ಸುಂಕವಾಗಿ ತೆರಬೇಕಾಗುತ್ತಿತ್ತು. ಹೊರದೇಶಗಳಿಗೂ ರಫ್ತಾಗುತ್ತಿದ್ದ ವೀಳ್ಯ ಅರಬ್ ನಾವಿಕರೊಂದಿಗೆ ಮಕ್ಕಾ, ಹಿಸಾಸ್ ಮತ್ತು

ಯೆಮೆನ್ ದೇಶಗಳಿಗೆ ಹೋಗುತ್ತಿತ್ತು. ತಾಂಬೂಲ ಸೇವನೆ ಭಾರತದೇಶದಿಂದ ಬೇರೆಡೆಗಳಿಗೂ ಹಬ್ಬಿತು.

ವೀಳ್ಯವನ್ನು ಪವಿತ್ರವೆಂದು ಭಾವಿಸಲಾಗಿತ್ತು. ಹಿಂದ್‌ದೇಶದ ಜನರು ಪಾದರಕ್ಷೆಗಳನ್ನು ಹಾಕಿಕೊಂಡು ತಾನ್‌ಬುಲ್ ತೋಟಕ್ಕೆ ಎಂದೂ ಪ್ರವೇಶಿಸುತ್ತಿರಲಿಲ್ಲ. ಅಂತೆಯೇ ಹೆಣ್ಣಾದವಳು ರಜಸ್ವಲೆಯಾದಾಗ ತೋಟವನ್ನು ಪ್ರವೇಶಿಸುವಂತಿರಲಿಲ್ಲ ಎಂಬುದಾಗಿ ಬುಜರ್‌ಬಿನ್ ಷರಿಯಾರ್ ಅಭಿಪ್ರಾಯಿಸುತ್ತಾನೆ. ಗಣಿಕೆಯರಂತೂ ತಾಂಬೂಲವನ್ನು ಸದಾ ಮೆಲ್ಲುತ್ತಿದ್ದರು. ತಾಂಬೂಲವನ್ನು ಮಡಿಸಿಕೊಡುವುದು ಒಂದು ಕಲೆಯೇ ಸರಿ. ಶೃಂಗಾರಸ ಪೋಷಣೆಗೆ ತಾಂಬೂಲವನ್ನು ಸಾಧನವಾಗಿ ಬಳಸುತ್ತಿದ್ದುದು ಭರತೇಶವೈಭವ ಹಾಗೂ ಆಮುಕ್ತಮಾಲ್ಯದಗಳಲ್ಲಿ ಈ ಸಂಗತಿ ಬಹು ಸೊಗಸಾಗಿ ಚಿತ್ರಿತವಾಗಿದೆ. ನಾಟ್ಯಶಾಸ್ತ್ರದಲ್ಲಿ ನರ್ತಕಿಯು ನಾಯಕನಿಗೆ ತಾಂಬೂಲವನ್ನು ಕೊಡುವ ಸಂದರ್ಭವನ್ನು ಕಲಾತ್ಮಕವಾಗಿ ಅಭಿವ್ಯಕ್ತಗೊಳಿಸುತ್ತಿದ್ದುದು ಕಟಕಾಮುಖ ಹಸ್ತ ವಿನಿಯೋಗದಿಂದಲೆ. ವಿಜಯನಗರದ ಜನಜೀವನದಲ್ಲಿ ವೀಳ್ಯ ಹಾಸುಹೊಕ್ಕಾಗಿ ಹೋಗಿತ್ತು. ಪಾಯಿಸ್‌ನ ಹೇಳಿಕೆಯಷ್ಟೇ ಪ್ರಸಿದ್ಧವಾದುದು ವಿಜಯನಗರದ 'ಪಾನ್ ಸುಪಾರಿ ಬಜಾರ್' ಕೂಡ. ಅಲ್ಲಿನ ಗಣಿಕೆಯರು ಮಹಾರಾಣಿಯರ ಸಮ್ಮುಖದಲ್ಲಿ ಅವರೊಂದಿಗೇ ಕುಳಿತು ವೀಳ್ಯವನ್ನು ಸೇವಿಸುವ ಹಕ್ಕನ್ನು ವಿಶೇಷ ಅಧಿಕಾರವನ್ನು ಪಡೆದಿದ್ದರು. ಕವಿತಾ ಪಿತಾಮಹನಾದ ಅಲ್ಲಸಾನಿಪೆದ್ದನನಾದರೋ–

ನಿರುಪಹತಿಸ್ಥಲಂಬುರಮಣೀಪ್ರಿಯದೂತಿಕ
ತೆಚ್ಚಿ ಇಚ್ಚು ಕ
ಪ್ಪುರಪುವಿಡೆ ಮಾತ್ಮಕಿಂಪ್ಪೆನಭೋಜನ
ಮುಯ್ಯಲಮಂಚ ಮೊಪ್ಪುತ ಲೇಖ
ಪ್ಪುರಯುರಸಜ್ಞಲೂಹತೆಲಿಯಂಗಲ
ಪಾಠಕೋತ್ತಮುಲ್
ದೊರಕಿನಕಾಕ ಊರಕಕೃತುಲ್ ರಚಯಿಂಪ
ಮನಂಗ ಶಕ್ಯಮೆ ।

ಎಂಬುದಾಗಿ ನುಡಿದಿದ್ದಾನೆ. ಆತ್ಮಕಿಂಪಾದ ಭೋಜನವು ಉಯ್ಯಾಲೆಯ ಮಂಚವು ರಮಣೀಪ್ರಿಯದೂತಿಕೆಯು ಕೊಡುವ ಕರ್ಪೂರದ ವೀಳ್ಯವು ಇಲ್ಲದೆ ಸುಮ್ಮನೆ ಕೃತಿಗಳನ್ನು ರಚಿಸೆಂದರೆ ಸಾಧ್ಯವೇ ಎನ್ನುತ್ತಾ ತಾಂಬೂಲವನ್ನು ಕವಿತ್ವಪ್ರೇರಣಾಶಕ್ತಿಯ ಸ್ಥಾಯಿಗೆ ಕೊಂಡೊಯ್ದಿದ್ದಾನೆ. ಹೀಗೆ ವೀಳ್ಯದ ಬಳಕೆಯು ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಸಾಂಘಿಕವಾಗಿ ಜನರಲ್ಲಿ ಅಂದಿನಿಂದ ಇಂದಿನವರೆಗೂ ವೈವಿಧ್ಯಮಯವಾಗಿ ಬೆಳೆದುಬಂದಿದೆ.

## ಗ್ರಂಥಋಣ


Al-Masudi, *History of India as Told by Its Own Historians*
R. K. Chaube, *Socio-Economic Conditions in the Ramayana*
Jeannine Auboyer, *Daily life in Ancient India* 200 B. C.-700 A. D.
Mandsor Inscription of Kumara Gupta I, A. D. 473
Vatsyana's *Kamasutra*
ರತ್ನಾಕರವರ್ಣಿ, ಭರತೇಶ ವೈಭವ
ಆಮುಕ್ತಮಾಲ್ಯದ,
ಅಭಿನವದರ್ಪಣ,
*Muruzal Zahab*, Al-Masudi (Trans). Meynard
Bazurg-bin-Shariyar, *Ajaibul Hind*
A. Riccie, *Travels of Marco Polo*
Robert Sewell, *A Forgotten Empire*
EC IV Kollegal 97 ; Corpus 13, No. 14